## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1054 (1275)
ಉತ್ತರಿಸುವ ದಿನಾಂಕ : 17.03.2020
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಗಣಿ ಮತ್ತು ಭೂ ವಿಜ್ಞಾನ ಸಚಿವರು.

| ಪ್ರಶ್ನೆ ಸಂಖ್ಯೆ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಟ್ಟಿ ಚಿನ್ನದ ಗಣಿಯ ಉತ್ಪಾದನೆಯು ಕುಂಠಿತವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಟ್ಟಿ ಚಿನ್ನದ ಗಣಿ ಕಂಪನಿಯ ಉತ್ಪಾದನೆಯು ಕುಂಠಿತವಾಗಿರುವುದಿಲ್ಲ, ಸತತವಾಗಿ ಮೂರು ವರ್ಷಗಳಿಂದ ಹೆಚ್ಚಳವಾಗಿರುತ್ತದೆ. |
| ಆ) | ಸರ್ಕಾರಿ ಸ್ವಾಮ್ಯದಲ್ಲಿರುವ ಹಟ್ಟಿ ಚಿನ್ನದ ಗಣಿಯನ್ನು ಯಾವಾಗ ಅರಂಭಿಸಲಾಯಿತು; | 1947 ಜುಲೈ 8 ರಂದು ಅಧಿಕೃತವಾಗಿ ಹೈದ್ರಾಬಾದ್ ಚಿನ್ನದ ಗಣಿ ನಿಯಮಿತ ಎಂದು ನೋಂದಾಯಿತವಾಗಿರುತ್ತದೆ. 1956 ರಲ್ಲಿ ಮೈಸೂರು ರಾಜ್ಯಕ್ಕೊಳಪಟ್ಟು, ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ ಎಂದು ಮರು ನಾಮಕರಣವಾಗಿರುತ್ತದೆ. |
| ಇ) | ಸದರಿ ಚಿನ್ನದ ಗಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರು ಹಾಗೂ ಆಡಳಿತ ಸಿಬ್ಬಂದಿಗಳ ಸಂಖ್ಯೆ ಎಷ್ಟು; (ವೃಂದವಾರು ಮಾಹಿತಿ ತಿಳಿಸುವುದು) | (see table below) |
| ಈ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಉತ್ಪಾದಿಸಲಾದ ಚಿನ್ನದ ಪ್ರಮಾಣ ಎಷ್ಟು; | (see table below) |
| ಉ) | ಪ್ರತಿ ವರ್ಷ ಚಿನ್ನದ ಉತ್ಪಾದನೆಗಾಗಿ ಮಾಡುವ ಒಟ್ಟು ವೆಚ್ಚವೆಷ್ಟು; | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಚಿನ್ನದ ಉತ್ಪಾದನೆಗಾಗಿ ಮಾಡಲಾದ ಒಟ್ಟು ವೆಚ್ಚದ ವಿವರ (see table below) |

ಇ) ಉತ್ತರ:

| ವೃಂದವಾರು | ಚಿನ್ನದ ಗಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರು ಹಾಗೂ ಆಡಳಿತ ಸಿಬ್ಬಂದಿಗಳು ಸಂಖ್ಯೆ |
|---|---|
| 'ಎ' | 05 |
| 'ಬಿ' | 141 |
| 'ಸಿ' | 2183 |
| 'ಡಿ' | 1699 |

ಈ) ಉತ್ತರ:

| ವರ್ಷ | ಚಿನ್ನದ ಉತ್ಪಾದನೆ (ಕೆ.ಜಿ.ಗಳಲ್ಲಿ) |
|---|---|
| 2016–17 | 1579.72 |
| 2017–18 | 1638.16 |
| 2018–19 | 1663.17 |

ಉ) ಉತ್ತರ:

| ವರ್ಷ | ಚಿನ್ನದ ಉತ್ಪಾದನೆಗೆ ಮಾಡಲಾದ ಒಟ್ಟು ವೆಚ್ಚ (ಕೋಟಿ. ರೂ.ಗಳಲ್ಲಿ) |
|---|---|
| 2016–17 | 414.11 |
| 2017–18 | 452.15 |
| 2018–19 | 426.23 |

| | | |
|---|---|---|
| ಊ) | ರಾಜ್ಯದ ಇತರೆ ಭಾಗಗಳಲ್ಲಿ ಚಿನ್ನದ ನಿಕ್ಷೇಪ ಇರುವುದು ವರದಿಯಾಗಿದ್ದು, ಇದು ನಿಜವಾಗಿದ್ದರೆ ಚಿನ್ನದ ಉತ್ಪಾದನೆಗಾಗಿ ಸರ್ಕಾರ ಯೋಜನೆ ಹಾಕಿಕೊಂಡಿದೆಯೇ? | ಹೌದು. ತುಮಕೂರು ಜಿಲ್ಲೆಯ, ಶಿರಾ ತಾಲ್ಲೂಕಿನ, ಅಜ್ಜನಹಳ್ಳಿ ಗ್ರಾಮ ವ್ಯಾಪ್ತಿಯಲ್ಲಿ ಕೇಂದ್ರ ಸರ್ಕಾರದ ಜಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ ಸಂಸ್ಥೆಯು 8 ರಿಂದ 10 ಹೊಂದಿಕೊಂಡ ಬ್ಲಾಕ್‌ಗಳಲ್ಲಿ ಖನಿಜಾನ್ವೇಷಣೆ ಕೈಗೊಂಡಿದ್ದು ಅದರಲ್ಲಿ 04 ಬ್ಲಾಕ್‌ಗಳ ಪ್ರದೇಶದಲ್ಲಿ ಜಿ-2 ಹಂತದ ಅನ್ವೇಷಣೆ ಪೂರ್ಣಗೊಳಿಸಿದ್ದು, ನಿಕ್ಷೇಪವು ಆಶಾದಾಯಕವಾಗಿದೆ. ಉಳಿದ ಬ್ಲಾಕ್‌ಗಳಲ್ಲಿ ಅನ್ವೇಷಣಾ ಕಾರ್ಯವು ಪ್ರಗತಿಯಲ್ಲಿರುತ್ತದೆ.<br>ಅನ್ವೇಷಣಾ ಕಾರ್ಯವು ಪೂರ್ಣಗೊಂಡ ನಂತರ ಮೇಲಿನ ಎಲ್ಲಾ ಬ್ಲಾಕುಗಳನ್ನು (ಚಿಕ್ಕ ಚಿಕ್ಕ ಬ್ಲಾಕುಗಳು) ಒಟ್ಟುಗೂಡಿಸಿ ಒಂದೇ ಬ್ಲಾಕನ್ನು ಮಾಡಿ The Mineral (Auction) Rules, 2015 ರ ನಿಯಮಗಳನ್ವಯ ಹರಾಜಿಗೊಳಪಡಿಸಲಾಗುವುದು. |

ಸಂಖ್ಯೆ: ಸಿಐ 18 ಎಂಪಿಪಿ 2020

(ಸಿ.ಸಿ. ಪಾಟೀಲ)
ಗಣಿ ಮತ್ತು ಭೂ ವಿಜ್ಞಾನ ಸಚಿವರು.